ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಬುಧವಾರ, ದಿನಾಂಕ : 04 ನೇ ಮಾರ್ಚ್, 2020

ಮೂಲ ಮಾಲೀಕರಲ್ಲದವರಿಗೆ ಕೃಷಿ ಭೂಮಿ ಖಾತೆಗಳನ್ನು ನೀಡುತ್ತಿರುವ ಕುರಿತು

ಶ್ರೀ ಕೆ.ಸಿ. ಕೊಂಡಯ್ಯ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) :-

253 (255) ಮಾನ್ಯ ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದಲ್ಲಿ ಗ್ರಾಮೀಣ ಪ್ರದೇಶಕ್ಕೆ ಸಂಬಂಧಪಟ್ಟಂತೆ ಮೂಲ ಮಾಲೀಕರ ಸಹಿ ಇಲ್ಲದೆ, ಕೃಷಿ ಭೂಮಿಗಳನ್ನು ಸರ್ಕಾರಿ ಅಧಿಕಾರಿಗಳು ಬೇರೆಯವರಿಗೆ ಖಾತೆ ಮಾಡಿಕೊಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ಮೂಲ ಕೃಷಿ ಜಮೀನಿನ ಮಾಲೀಕರು ಮತ್ತೆ ತಮ್ಮ ಜಮೀನನ್ನು ವಶಕ್ಕೆ ಪಡೆಯಲು ಯಾವ ಕ್ರಮ ಕೈಗೊಳ್ಳಲಾಗಿದೆ;

(ಇ) ಈ ಕಾರ್ಯದಲ್ಲಿ ಭಾಗಿಯಾಗಿರುವ ಅಧಿಕಾರಿಗಳ ಮೇಲೆ ಸರ್ಕಾರ ಯಾವ ಕ್ರಮ ಕೈಗೊಂಡಿದೆ;

(ಈ) ಸರ್ವೆ ನಂ. 99/5, 24/ಸಿ, ಕುಡುಗುಬಾಳು ಗ್ರಾಮ, ನಾಗಮಂಗಲ ತಾಲ್ಲೂಕು, ಮಂಡ್ಯ ಜಿಲ್ಲೆಯ 10 ವರ್ಷಗಳ ದಾಖಲೆ ಪರಿಶೀಲಿಸಿ ಮಾಹಿತಿ ನೀಡುವುದು?